

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 139 (19) |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಬಿ.ಜಿ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 13-12-2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ). ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಿಂದ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ರೂಪಿಸಿರುವ ಯೋಜನೆಗಳು ಯಾವುವು;<br>(ಸಂಪೂರ್ಣ ವಿವರ ನೀಡುವುದು) | **ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ :**<br>ರಾಜ್ಯದಾದ್ಯಂತ ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮವು ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಯನ್ನು ಹಾಗೂ ರಾಜ್ಯ ಸರ್ಕಾರದ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯನ್ನು ಜಾರಿಗೆ ತಂದಿದ್ದು, ರಾಜ್ಯದ ಯುವ ಜನತೆಗೆ ಅಲ್ಪಾವಧಿ ಕೌಶಲ್ಯಾಧಾರಿತ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಉದ್ಯೋಗ ಕಲ್ಪಿಸುವ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.<br>**ಸಿಡಾಕ್:**<br>ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ, ಕರ್ನಾಟಕ ಉದ್ಯಮಶೀಲತಾಭಿವೃದ್ಧಿ ಕೇಂದ್ರ (ಸಿಡಾಕ್) ವತಿಯಿಂದ ಈ ಕೆಳಕಂಡ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.<br>1. ಒಂದು ದಿನದ ಉದ್ಯಮಶೀಲತಾ ಜಾಗೃತಿ ಕಾರ್ಯಕ್ರಮ<br>2. ಮೂರು ದಿನಗಳ ಉದ್ಯಮಶೀಲತಾ ಪ್ರೇರಣಾ ಕಾರ್ಯಕ್ರಮ<br>3. ಮೂರು ದಿನಗಳ ಉದ್ಯಮಶೀಲತಾ ಜಾಗೃತಿ ಕಾರ್ಯಕ್ರಮ<br>4. ಆರು ದಿನಗಳ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ<br>5. ಹತ್ತು ದಿನಗಳ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ.<br>ಮೂವತ್ತು ದಿನಗಳ ವಲಯಾಧಾರಿತ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ.<br>**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):**<br>ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯ ಸಂಜೀವಿನಿ-ಕೆಎಸ್‌ಆರ್‌ಎಲ್‌ಪಿಎಸ್ ಮೂಲಕ ಪ್ರಮುಖವಾಗಿ ಗ್ರಾಮೀಣ ಮಹಿಳಾ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಕಲ್ಪಿಸುವ ಉದ್ದೇಶದಿಂದ ಈ ಕೆಳಗಿನಂತೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಮುಂದುವರೆದು, ಸ್ವಸಹಾಯ ಗುಂಪುಗಳ ಸದಸ್ಯರು ಉತ್ಪಾದಿಸುತ್ತಿರುವ ಉತ್ಪನ್ನಗಳಿಗೆ ವಿವಿಧ ಮಾರುಕಟ್ಟೆ ಸೌಲಭ್ಯಗಳನ್ನು ಒದಗಿಸುವುದು ಸೇರಿದಂತೆ ಒಂದಕ್ಕಿಂತ ಹೆಚ್ಚಿನ ಜೀವನೋಪಾಯ ಚಟುವಟಿಕೆ ಒದುಗಿಸುವುದಕ್ಕಾಗಿ<br>ನರೇಗಾ ಮತ್ತು ವಿವಿಧ ಇಲಾಖೆಗಳ ಸೌಲಭ್ಯಗಳನ್ನು ಒಗ್ಗೂಡಿಸುವಿಕೆ ಪರಿಕಲ್ಪನೆಯಡಿ ಒದಗಿಸಲಾಗುತ್ತಿದೆ. |

| | |
|---|---|
| | 1. ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ<br>ಅ. **ಸಾಮಾಜಿಕ ಸೇರ್ಪಡೆ ಮತ್ತು ಕ್ರೋಡೀಕರಣ**: ಎನ್ ಆರ್ ಎಲ್ ಎಂ ನ ಪ್ರಕಾರ ಗ್ರಾಮೀಣ ಭಾಗದ ಎಲ್ಲಾ ಬಡಕುಟುಂಬದಿಂದ ಓರ್ವ ಮಹಿಳೆಯನ್ನು ಒಗ್ಗೂಡಿಸುವುದು ಕಡ್ಡಾಯವಾಗಿದೆ. ಯೋಜನೆಯ ಪ್ರಮುಖ ಚಟುವಟಿಕೆಯೆಂದರೆ ಹೊಸ ಸ್ವಸಹಾಯ ಗುಂಪುಗಳ ರಚನೆ, ಸ್ವಸಹಾಯ ಗುಂಪುಗಳ ಬಲವರ್ಧನೆ ಹಾಗೂ ವಾರ್ಡ್ ಮತ್ತು ಗ್ರಾಮ ಪಂಚಾಯಿತಿ ಮಟ್ಟದ ಒಕ್ಕೂಟಗಳನ್ನು ರಚಿಸುವ ಮೂಲಕ ಅವರಿಗೆ ಜೀವನೋಪಾಯ ಉದ್ಯೋಗಗಳನ್ನು ಕಲ್ಪಿಸುವುದಾಗಿರುತ್ತದೆ. ಈ ಕೆಳಗಿನ ಪ್ರಕ್ರಿಯೆಯಂತೆ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• **ಸ್ವಸಹಾಯ ಗುಂಪು ರಚನೆ** : ಸ್ವಸಹಾಯ ಗುಂಪುಗಳು ಸಮುದಾಯದ ಸಾಂಸ್ಥೀಕರಣದ ಮೊದಲ ಹಂತದ ವ್ಯವಸ್ಥೆಯಾಗಿರುತ್ತದೆ. ಸುಮಾರು 10 ರಿಂದ 20 ಮಹಿಳೆಯರು ಜೊತೆಗೂಡಿ ಗುಂಪೊಂದನ್ನು ರಚಿಸಲಾಗುವುದು.<br>• **ವಾರ್ಡ್ ಮಟ್ಟದ ಒಕ್ಕೂಟ**: ಸಮುದಾಯದ ಸಾಂಸ್ಥೀಕರಣದ ಎರಡನೆಯ ಹಂತದ ಸಂಘಟನೆ ಇದಾಗಿರುತ್ತದೆ. ಕನಿಷ್ಠ 2ರಿಂದ 20 ಸ್ವಸಹಾಯ ಗುಂಪುಗಳು ಜೊತೆಗೂಡಿ ವಾರ್ಡ್ ಮಟ್ಟದ ಒಕ್ಕೂಟವನ್ನು ರಚಿಸಲಾಗುವುದು.<br>• **ಗ್ರಾಮ ಪಂಚಾಯಿತಿ ಮಟ್ಟದ ಒಕ್ಕೂಟ ರಚನೆ** : ಸಮುದಾಯ ಸಾಂಸ್ಥೀಕರಣದ ಮೂರನೆಯ ಹಂತವೆಂದರೆ ಗ್ರಾಮ ಪಂಚಾಯತ್ ಮಟ್ಟದ ಒಕ್ಕೂಟ. ಇದು ಗ್ರಾಮ ಪಂಚಾಯ್ತಿಗೆ ಸೇರಿದ ವಾರ್ಡ್ ಒಕ್ಕೂಟ ಸಂಘಗಳ ಸಂಘಟನೆಯಾಗಿರುತ್ತದೆ.<br>• **ತಾಲ್ಲೂಕು ಮಟ್ಟದ ಒಕ್ಕೂಟ ರಚನೆ**: ಸಮುದಾಯದ ಸಾಂಸ್ಥೀಕರಣದ ನಾಲ್ಕನೆಯ ಹಂತವೆಂದರೆ ತಾಲ್ಲೂಕು ಮಟ್ಟದ ಒಕ್ಕೂಟ. ಗ್ರಾಮ ಪಂಚಾಯ್ತಿ ಹಂತದ ಒಕ್ಕೂಟಗಳು ಸೇರಿ ತಾಲ್ಲೂಕು ಹಂತದ ಒಕ್ಕೂಟವನ್ನು ರಚಿಸುವರು.<br>ಆ. **ಸ್ವಸಹಾಯ ಗುಂಪುಗಳ ತರಬೇತಿ**: ಸ್ವಸಹಾಯ ಗುಂಪುಗಳಿಗೆ ಪಂಚಸೂತ್ರಗಳ ಪಾಲನೆ, ಬ್ಯಾಂಕ್ ಸಂಪರ್ಕ, ಜೀವನೋಪಾಯ ಚಟುವಟಿಕೆಗಳು, ವಾರ್ಷಿಕ ಲೆಕ್ಕ ಪರಿಶೋಧನೆ ಇನ್ನೂ ಮುಂತಾದ ತರಬೇತಿಗಳನ್ನು ನೀಡುವುದರ ಮೂಲಕ ಗುಂಪುಗಳನ್ನು ಸುಸ್ಥಿರವಾಗಿಸಲು ಕ್ರಮವಹಿಸುವುದಾಗಿದೆ. ಇವುಗಳನ್ನು ಸಮುದಾಯ ಸಂಪನ್ಮೂಲ ವ್ಯಕ್ತಿಗಳ ಮೂಲಕ ಮಾಡಲಾಗುವುದು.<br>ಇ. **ಆರ್ಥಿಕ ಸೇರ್ಪಡೆ** : ಸ್ವಸಹಾಯ ಗುಂಪುಗಳ ಈ ಕೆಳಕಂಡ ಮೂಲಗಳಿಂದ ಅನುದಾನದ ಸೌಲಭ್ಯವನ್ನು ಪಡೆಯಬಹುದಾಗಿದೆ.<br>• **ಸುತ್ತುನಿಧಿ** : ಹೊಸ ಮತ್ತು ಬ್ಯಾಂಕ್ ಸಾಲ ಪಡೆಯದ ಸ್ವಸಹಾಯ ಗುಂಪುಗಳಿಗೆ, ಬ್ಯಾಂಕ್ ಸಾಲ ಪಡೆಯಲು ಅನುವಾಗುವಂತೆ ಮತ್ತು ಆರ್ಥಿಕವಾಗಿ ಸಬಲರಾಗುವಂತೆ ಮಾಡಲು ಅರ್ಹ ಗುಂಪುಗಳನ್ನು ಗುರ್ತಿಸಿ, ಶ್ರೇಣೀಕರಣ ಮಾಡಿ ಗರಿಷ್ಟ ರೂ. 15000/- ಗಳನ್ನು ಅನುದಾನದ ರೂಪದಲ್ಲಿ ಒದಗಿಸುವುದು.<br>• **ಸಮುದಾಯ ಬಂಡವಾಳ ನಿಧಿ**: (ಸಿ.ಐ.ಎಫ್) ಒಕ್ಕೂಟಗಳ ಸುಸ್ಥಿರತೆಯನ್ನು ಬೆಂಬಲಿಸಲು ಸಮುದಾಯ ಬಂಡವಾಳ ನಿಧಿಯನ್ನು ನೀಡಲಾಗುವುದು. ಸಮುದಾಯ ಬಂಡವಾಳ ನಿಧಿಯನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳಿಗೆ ರೂ.1,25,000 ಹಾಗೂ ಇತರೆ ಗುಂಪುಗಳಿಗೆ ರೂ.75,000/-ಗಳನ್ನು ನೀಡಲಾಗುತ್ತಿದೆ.<br>• **ಸ್ವಸಹಾಯ ಗುಂಪುಗಳ ಬ್ಯಾಂಕ್ ಲಿಂಕೇಜ್** : ಸುತ್ತು ನಿದಿ, ಸಮುದಾಯ ಬಂಡವಾಳ ನಿಧಿ ಮತ್ತು ಬ್ಯಾಂಕ್ ಲಿಂಕೇಜ್ಗೆ undefined ಅನುದಾನದ ಬೆಂಬಲವನ್ನು ನೀಡುವ ಮೂಲಕ ಬಡಜನರ ಆರ್ಥಿಕ ಭದ್ರತೆ/ಸುರಕ್ಷತೆಯನ್ನು ಉತ್ತೇಜಿಸುವುದಾಗಿದೆ.<br>• **ಬಡ್ಡಿ ಸಹಾಯಧನ**: ಎನ್ಅರ್ಎಲ್ಎಂ ಬಡ್ಡಿ ಸಹಾಯಧನ ಅಡಿಯಲ್ಲಿ ರೂ.3 ಲಕ್ಷದ ವರೆಗೆ ಸಾಲ ಪಡೆಯುವ ಬಿಪಿಎಲ್ ಸ್ವ ಸಹಾಯ ಗುಂಪುಗಳ ಸದಸ್ಯರುಗಳಿಗೆ ವಾರ್ಷಿಕ ಶೇ.7ರ ಬಡ್ಡಿ ದರದಲ್ಲಿ ಸಾಲ ನೀಡಲಾಗುವುದು.<br><br>2. **ದೀನ ದಯಾಳ ಉಪಾದ್ಯಾಯ ಗ್ರಾಮೀಣ ಕೌಶಲ್ಯ ಯೋಜನೆಯ-ಡಿಡಿಯುಜಿಕೆವೈ:**<br>ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು(60:40) ರಾಜ್ಯದಲ್ಲಿ 2013-14ನೇ ಸಾಲಿನಿಂದ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ 18 ರಿಂದ 35 ವಯೋಮಾನದ ಗ್ರಾಮೀಣ ಯುವಕ ಯುವತಿಯರನ್ನು ಗುರುತಿಸಿ ಅವರುಗಳ |

| | |
|---|---|
| | ವಿದ್ಯಾರ್ಹತೆಗನುಗುಣವಾಗಿ (8ನೇ ತರಗತಿ ಮೇಲ್ಪಟ್ಟು) ಕಂಪ್ಯೂಟರ್, ಹಾಸ್ಪಿಟಾಲಿಟಿ, ಡಾಟಾಎಂಟ್ರಿ, ಪ್ರವಾಸೋದ್ಯಮ, ಮೆಕಾನಿಕ್, ನರ್ಸಿಂಗ್, ಸೆಕ್ಯೂರಿಟಿ ಸರ್ವಿಸಸ್, ಟೈಲರಿಂಗ್ ಇತ್ಯಾದಿಯಾಗಿ ವಿವಿಧ ಕ್ಷೇತ್ರಗಳಲ್ಲಿ ಕನಿಷ್ಠ 3 ತಿಂಗಳುಗಳಿಂದ ಒಂದು ವರ್ಷದವರೆಗೆ ಉಚಿತ ವಸತಿಯೊಂದಿಗಿನ ಶ್ರೇಷ್ಠ ಗುಣಮಟ್ಟದ ಕೌಶಲ್ಯ ತರಬೇತಿ ನೀಡಿ ಕಡ್ಡಾಯವಾಗಿ ಉದ್ಯೋಗ ಒದಗಿಸುವ ಏಕೈಕ ಯೋಜನೆಯಾಗಿದೆ.<br>3. **ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ:** ಸದರಿ ತರಬೇತಿಯ ಸಂಸ್ಥೆಯ ಮೂಲಕ ಗ್ರಾಮೀಣ ನಿರುದ್ಯೋಗ ಯುವಕ/ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳಲು ತರಬೇತಿಯನ್ನು ನೀಡಲಾಗುತ್ತಿದೆ, ಸದರಿ ತರಬೇತಿಯಲ್ಲಿ ಸ್ವ-ಉದ್ಯೋಗ ಕೈಗೊಳ್ಳಬೇಕಾಗಿರುವ ಅಗತ್ಯ ಮಾಹಿತಿ, ಯೋಜನಾ ವರದಿ, ಮಾರ್ಕೆಟ್ ಆಯ್ಕೆ ಸಂಬಂಧಿಸಿದಂತೆ ತರಬೇತಿಯನ್ನು ನೀಡಲಾಗುತ್ತಿದೆ. ತರಬೇತಿಯ ಸಂದರ್ಭದಲ್ಲಿ ಶೀಭಿರಾರ್ಥಿಗಳಿಗೆ ಸಮವಸ್ತ್ರ ನೀಡಲಾಗುತ್ತದೆ.<br>4. **ಉನ್ನತಿ ಕೌಶಲ್ಯ ಯೋಜನೆ:** ಸದರಿ ಯೋಜನೆಯ ತರಬೇತಿಯನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ 2018-19 ರಲ್ಲಿ ಒಂದು ನೂರ ದಿನ ಕೆಲಸವನ್ನುನಿರ್ವಹಿಸಿದ ಕುಟುಂಬದ ಒಬ್ಬ ಸದಸ್ಯರಿಗೆ, ಎಸ್.ಬಿ.ಆಯ್-ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ, ದಿನ ದಯಾಳ ಉಪಾದ್ಯಾಯ ಗ್ರಾಮೀಣ ಕೌಶಲ್ಯ ಯೊಜನೆ ಮತ್ತು ಕೃಷಿ ವಿಜ್ಞಾನ ಕೇಂದ್ರಗಳಲ್ಲಿ ಸ್ವ- ಉದ್ಯೋಗ ತರಬೇತಿಯನ್ನು ನೀಡಲಾಗುತ್ತದೆ. ಸದರಿ ತರಬೇತಿಯನ್ನು ಪಡೆದ ಅಭ್ಯಾರ್ಥಿಗಳಿಗೆ ಪ್ರತಿ ದಿನಕ್ಕೆ ರೂ: 289/- ಶಿಷ್ಯವೇತನವನ್ನು ನೀಡಲಾಗುತ್ತದೆ ಹಾಗೂ ತರಬೇತಿಯ ಸಂದರ್ಭದಲ್ಲಿ ಸಮವಸ್ತ್ರ ನೀಡಲಾಗುತ್ತದೆ.<br><br>__ಡೇ-ನಲ್ಮ್:__<br><br>ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯ ಡೇ-ನಲ್ಮ್ ಅಭಿಯಾನದಡಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1) **ಸಾಮಾಜಿಕ ಕ್ರೋಢೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ**<br>ಸದರಿ ಉಪಘಟಕದಡಿ ಮಹಿಳಾ ಸ್ವ-ಸಹಾಯ ಸಂಘ, ಪ್ರದೇಶ ಮಟ್ಟದ ಒಕ್ಕೂಟಗಳ ರಚನೆ, ಆವರ್ತಕ ನಿಧಿ ವಿತರಣೆ ಹಾಗೂ ಸಂಘದ ಸದಸ್ಯರುಗಳಿಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು.<br><br>2) **ಸ್ವಯಂ ಉದ್ಯೋಗ ಕಾರ್ಯಕ್ರಮ:**<br><br>ಸದರಿ ಉಪಘಟಕದಡಿ ವೈಯಕ್ತಿಕ ಕಿರು ಉದ್ದಿಮೆ, ಗುಂಪು ಕಿರು ಉದ್ದಿಮೆ ಹಾಗೂ ಎಸ್‌ಹೆಚ್‌ಜಿ ಬ್ಯಾಂಕ್ ಕ್ರೆಡಿಟ್ ಲಿಂಕೇಜ್‌ಗೆ ಸಂಬಂಧಿಸಿದಂತೆ ಕ್ರಮವಾಗಿ ಬ್ಯಾಂಕಿನಿಂದ ರೂ.2.00, ರೂ.10.00 ಲಕ್ಷ ಮತ್ತು ರೂ.1.00 ಲಕ್ಷವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು. ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು ಹಾಗೂ ಸ್ವ-ಸಹಾಯ ಸಂಘಗಳು ನಿಯಮಿತವಾಗಿ ಸಾಲವನ್ನು ಮರು ಪಾವತಿಸಿದರೆ ಶೇ.3 ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನ ನೀಡಲಾಗುವುದು.<br><br>3) **ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ:**<br>ಸದರಿ ಉಪಘಟಕದಡಿ ನಗರದ ನಿರುದ್ಯೋಗ ಯುವಕ / ಯುವತಿಯರಿಗೆ ವಿವಿಧ ಉದ್ಯೋಗಾಧಾರಿತ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಿ, ಪ್ರಮಾಣಿಕರಣ ಮತ್ತು ಮೌಲ್ಯಮಾಪನವನ್ನು ಕೈಗೊಂಡು, ಕೇಂದ್ರ ಸರ್ಕಾರದ ಪ್ರಮಾಣ ಪತ್ರವನ್ನು ನೀಡಿ, ತರಬೇತಿಯನ್ನು ಪಡೆದುಕೊಂಡ ಶೇ.70 ರಷ್ಟು ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲಾಗುವುದು. |

| | |
|---|---|
| | 4)ನಗರದ ವಸತಿ ರಹಿತರಿಗೆ ಆಶ್ರಯ:<br>ಸದರಿ ಉಪಘಟಕದಡಿ ನಗರದ ವಸತಿ ರಹಿತರನ್ನು ರ್ಯಾಪಿಡ್ ಸಮೀಕ್ಷೆಯ ಮೂಲಕ ಗುರುತಿಸಿ, ಆಶ್ರಯವನ್ನು ಕಲ್ಪಿಸಲಾಗುವುದು<br>5)ನಗರದ ಬೀದಿ ವ್ಯಾಪಾರಸ್ಥರಿಗೆ ಬೆಂಬಲ:<br>ಸದರಿ ಉಪಘಟಕದಡಿ ನಗರದ ಬೀದಿ ವ್ಯಾಪಾರಸ್ಥರನ್ನು ಗುರುತಿಸಿ, ಗುರುತಿನ ಚೀಟಿ ಮತ್ತು ಮಾರಾಟ ಪ್ರಮಾಣ ಪತ್ರವನ್ನು ವಿತರಿಸಲಾಗುವುದು.<br>6)ಸಾಮರ್ಥ್ಯ ಅಭಿವೃದ್ಧಿ ಮತ್ತು ತರಬೇತಿ:<br>ಸದರಿ ಉಪಘಟಕದಡಿ ಅಭಿಯಾನವನ್ನು ಅನುಷ್ಠಾನಗೊಳಸಲು ತೊಡಗಿಸಿಕೊಂಡಿರುವ ಅಧಿಕಾರಿ / ಸಿಬ್ಬಂದಿಗಳಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಲಾಗುತ್ತಿದೆ. |
| (ಆ). ರೂಪಿಸಿರುವ ಯೋಜನೆಗಳ ಪ್ರಯೋಜನ ಪಡೆಯಲು ನಿಗಧಿಪಡಿಸಿರುವ ಮಾನದಂಡಗಳೇನು; (ವಿವರ ನೀಡುವುದು) | <u>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ :</u><br>ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ನಿಗದಿಪಡಿಸಲಾಗಿರುವ ಮಾರ್ಗಸೂಚಿಗಳನ್ವಯ ರಾಜ್ಯದಾದ್ಯಂತ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರಧಾನ ಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳನ್ನು ಜಾರಿಗೊಳಸಲಾಗಿರುತ್ತದೆ. ಅದರಂತೆ ಸದರಿ ಯೋಜನೆಗಳಡಿ ಕನಿಷ್ಠ ವಯೋಮಾನವನ್ನು 15 ರಿಂದ 35 ವರ್ಷಗಳನ್ನು ನಿಗದಿಪಡಿಸಲಾಗಿದ್ದು, ಅನಕ್ಷರಸ್ಥರನ್ನು ಒಳಗೊಂಡಂತೆ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳು ಸಹ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ಪಡೆದು ಜೀವನ ನಡೆಸಲು ಶಕ್ತರಾಗುವಂತೆ ಉದ್ಯೋಗಾವಕಾಶ ಹಾಗೂ ಉದ್ಯಮಶೀಲತೆಗೆ ಅವಕಾಶವನ್ನು ಕಲ್ಪಿಸುವ ಮೂಲಕ ಹಾಗೂ ಸದರಿ ತರಬೇತಿದಾರರನ್ನು ಮುಖ್ಯವಾಹಿನಿಗೆ ತರಲು ಪ್ರಯತ್ನ ಮಾಡಲಾಗಿದೆ.<br><br><u>ಸಿಡಾಕ್:</u><br>ರೂಪಿಸಿರುವ ಯೋಜನೆಗಳ ಪ್ರಯೋಜನ ಪಡೆಯಲು ಅಭ್ಯರ್ಥಿಗಳ ಕನಿಷ್ಠ ವಯೋಮಾನ 18 ವರ್ಷಗಳಾಗಿರಬೇಕು. ಉಳಿದಂತೆ ಯಾವುದೇ ಮಾನದಂಡಗಳು ಇರುವುದಿಲ್ಲ.<br><br><u>ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):</u><br>1. ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನದಡಿ ಸುತ್ತುನಿಧಿ ವಿತರಿಸಲು ಈ ಕೆಳಗಿನ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ<br>• ಮಹಿಳಾ ಸ್ವ-ಸಹಾಯ ಗುಂಪುಗಳು ಕನಿಷ್ಠ 5 (ಬಿಪಿಎಲ್) ಬಡ ವರ್ಗದ ಸದಸ್ಯರನ್ನು ಒಳಗೊಂಡಿರಬೇಕು.<br>• ಬಡವರ್ಗದ ಸದಸ್ಯರೆಂದರೆ:<br>• ಆರ್‌ಎಸ್‌ಬಿವೈ ಕಾರ್ಡ್ ಹೊಂದಿರುವವರು.<br>• ಎ ಎ ವೈ / ಬಿಪಿಎಲ್ ಪಡಿತರ ಚೀಟಿ ಹೊಂದಿರುವವರು<br>• 2011 ಎಸ್‌ಇಸಿಸಿ ಸರ್ವೆಯಲ್ಲಿ ಸ್ವಯಂ ಸೇರ್ಪಡೆ(Auto Inclusion) ವ್ಯಾಪ್ತಿಗೆ ಬರುವವರು<br>• ಕಳೆದ ಆರ್ಥಿಕ ವರ್ಷದಲ್ಲಿ ಎಮ್‌ಜಿಎನ್‌ಆರ್‌ಇಜಿಎ ಅಡಿಯಲ್ಲಿ 15 ದಿನ ಉದ್ಯೋಗ ಪೂರೈಸಿದ ಸದಸ್ಯರನ್ನು ಹೊಂದಿರುವ ಕುಟುಂಬದ ಮಹಿಳೆಯರು.<br>• ಸ್ವ ಸಹಾಯ ಗುಂಪು 'ಎ' ಮತ್ತು 'ಬಿ' ಶ್ರೇಣಿ ಪಡೆದಿರಬೇಕು.<br>• ಪಂಚಸೂತ್ರಗಳನ್ನು ಕಡ್ಡಾಯವಾಗಿ ಅನುಸರಣೆ ಮಾಡುತ್ತಿರುವ ಗುಂಪುಗಳಾಗಿರಬೇಕು. |

| | |
|---|---|
| | • ಬಡವರ್ಗದ ಸದಸ್ಯರೆಂದರೆ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆ ಕಾರ್ಡುದಾರ ಕುಟುಂಬದ ಸದಸ್ಯರು ಆ ಕಾರ್ಡಿನಲ್ಲಿ ಸದಸ್ಯರ ಹೆಸರು ನಮೂದಾಗಿರಬೇಕು, ಅಂತ್ಯೋದಯ ಅನ್ನ ಯೋಜನೆ ಮತ್ತು ಬಿಪಿಎಲ್ ಪಡಿತರ ಚೀಟಿ ಹೊಂದಿರುವ ಕುಟುಂಬದ ಸದಸ್ಯರು, 2011 ಎಸ್ಇಸಿಸಿ ಸರ್ವೇಯಲ್ಲಿ ಸ್ವಯಂ ಸೇರ್ಪಡೆ(Auto Inclusion) ವ್ಯಾಪ್ತಿಗೆ ಬರುವವರು, ಕಳೆದ ಆರ್ಥಿಕ ವರ್ಷದಲ್ಲಿ ಎಮ್ಜಿಎನ್ಆರ್ಇಜಿಎ ಅಡಿಯಲ್ಲಿ 15 ದಿನ ಉಧ್ಯೋಗ ಪೂರೈಸಿದ ಸದಸ್ಯರನ್ನು ಹೊಂದಿರುವ ಕುಟುಂಬದ ಮಹಿಳೆಯರು.<br>• ಏಳು ಹಂತಗಳ ಕಿರು ಬಂಡವಾಳ ಹೂಡಿಕೆ ಯೋಜನೆಯನ್ನು ತಯಾರಿಸಿರಬೇಕು.<br>• ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಕೇಂದ್ರೀಕೃತಗೊಂಡಿರುವ ಹಳ್ಳಿಗಳನ್ನು ಗುರುತಿಸುವುದು ಮತ್ತು ಆ ಹಳ್ಳಿಗಳಲ್ಲಿ ಅಸ್ಥಿತ್ವದಲ್ಲಿರುವ ಎಲ್ಲಾ ಅರ್ಹ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಗುಂಪುಗಳನ್ನು ಗುರುತಿಸುವುದು.<br>• ಭೂ ಚೇತನ ಯೋಜನೆ, ಸಂಸತ್ ಆದರ್ಶ ಗ್ರಾಮೀಣ ಯೋಜನೆ, ಕರ್ನಾಟಕ ಸಮಗ್ರ ಪೌಷ್ಠಿಕ ಅಭಿಯಾನ ಯೋಜನೆಗಳು ಅನುಷ್ಠಾನ ಗೊಳ್ಳುತ್ತಿರುವ ಹಳ್ಳಿಗಳು ಮತ್ತು ನದಿ ಪಾತ್ರಗಳ ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅರ್ಹ ಸ್ವ ಸಹಾಯ ಗುಂಪುಗಳನ್ನು ಪರಿಗಣಿಸುವುದು.<br>• ಇನ್‌ಟೆನ್ಸಿವ್ ತಾಲ್ಲೂಕುಗಳಲ್ಲಿ ವಾಸವಿರುವ ಆದಿ ಬುಡಕಟ್ಟು ಜನಾಂಗದ (ಜೇನು ಕುರುಬ ಮತ್ತು ಕೊರಗ- Primitive Scheduled Tribes) ಎಲ್ಲಾ ಅರ್ಹ ಸ್ವ ಸಹಾಯ ಗುಂಪುಗಳನ್ನು ಪರಿಗಣಿಸುವುದು.<br><br>2. **ದೀನ ದಯಾಳ ಉಪಾದ್ಯಾಯ ಗ್ರಾಮೀಣ ಕೌಶಲ್ಯ ಯೋಜನೆ** ಯಡಿ ತರಬೇತಿಯನ್ನು ಪಡೆಯಲು ಈ ಕೆಳಗಿನ ಮಾನದಂಡಗಳನ್ನು ಹೊಂದಿರಬೇಕು.<br>• ಗ್ರಾಮೀಣ ಪ್ರದೇಶದ ಯುವಕ/ಯುವತಿಯರಾಗಿರಬೇಕು<br>• 18 ರಿಂದ 35 ವಯೋಮಾನದವರಾಗಿರಬೇಕು,<br>• ಕನಿಷ್ಠ 5ನೇ ತರಗತಿಯವರೆಗೆ ಓದಿರಬೇಕು.<br>• ಬಿ.ಪಿ.ಎಲ್ ಕಾರ್ಡ ಹೊಂದಿರಬೇಕು.<br><br>3. **ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರ:** ಸದರಿ ತರಬೇತಿ ಕೇಂದ್ರದಲ್ಲಿ ತರಬೇತಿಯನ್ನು ಪಡೆಯಲು ಈ ಕೇಳಗಿನ ಮಾನದಂಡಗಳನ್ನು ಹೊಂದಿರಬೇಕು,<br>• ಗ್ರಾಮೀಣ ಪ್ರದೇಶದ ಯುವಕ/ಯುವತಿಯರಾಗಿರಬೇಕು,<br>• 18 ರಿಂದ 45 ವಯೋಮಾನದವರಾಗಿರಬೇಕು,<br>• ಕನಿಷ್ಠ 7ನೇ ತರಗತಿವರಿಗೆ ಓದಿರಬೇಕು,<br>• ಆಧಾರ ಕಾರ್ಡ ಮತ್ತು ಬಿ.ಪಿ.ಎಲ್ ಕಾರ್ಡ ಹೊಂದಿರಬೇಕು.<br><br>4. **ಉನ್ನತಿ ಕೌಶಲ್ಯ ಯೋಜನೆ:** ಸದರಿ ಯೋಜನೆಯಡಿ ತರಬೇತಿಯನ್ನು ಪಡೆಯಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ 2018-19 ನೇ ಸಾಲಿನಲ್ಲಿ ಒಂದು ನೂರ ದಿನ ಕೆಲಸವನ್ನು ಮಾಡಿರಬೇಕು, 18 ರಿಂದ 45 ವಯೋಮಾನದವರಾಗಿರಬೇಕು, ಕನಿಷ್ಠ 7ನೇ ತರಗತಿವರಿಗೆ ಓದಿರಬೇಕು, ಆಧಾರ ಕಾರ್ಡ ಮತ್ತು ಬಿ.ಪಿ.ಎಲ್ ಕಾರ್ಡ ಹೊಂದಿರಬೇಕು. |

- ಈ ಹಿಂದೆ ಯಾವುದೇ ಸರ್ಕಾರಿ ಯೋಜನೆ/ಎಸ್‌ಜಿಎಸ್‌ವೈ ಯೋಜನೆಯಿಂದ ಸುತ್ತುನಿಧಿ ಪಡೆದಿರುವ ಗುಂಪುಗಳಿಗೆ ನೀಡುವಂತಿಲ್ಲ.
- ಸುತ್ತುನಿಧಿ ಫಲಾನುಭವಿ ಸ್ವ-ಸಹಾಯ ಗುಂಪಿನಿಂದ ಸುತ್ತುನಿಧಿ ಸೌಲಭ್ಯಕ್ಕಾಗಿ ಕೋರಿಕೆ ಪತ್ರವನ್ನು ಮತ್ತು ಯಾವ ರೀತಿಯಾಗಿ ಉಪಯೋಗಿಸಿಕೊಳ್ಳುತ್ತಾರೆಂದು/ಬಳಸಿಕೊಳ್ಳುತ್ತಾರೆಂದು ಮಾಹಿತಿಯನ್ನು ಪಡೆಯುವುದು.
- ಪ. ಜಾತಿ ಮತ್ತು ಪ. ಪಂಗಡದ ಜನರು ಕೇಂದ್ರೀಕೃತಗೊಂಡಿರುವ ಹಳ್ಳಿಗಳನ್ನು ಗುರುತಿಸುವುದು ಮತ್ತು ಆ ಹಳ್ಳಿಯ ಎಲ್ಲಾ ಪ.ಜಾ ಮತ್ತು ಪ.ಪಂ.ದ ಜನರನ್ನು ಕಾರ್ಯಕ್ರಮದ ವ್ಯಾಪ್ತಿಗೆ ಒಳಪಡಿಸುವುದು.
- ಭೂ ಚೇತನ ಯೋಜನೆ, ಸಂಸತ್ ಆದರ್ಶ ಗ್ರಾಮೀಣ ಯೋಜನೆ, ಕರ್ನಾಟಕ ಸಮಗ್ರ ಪೌಷ್ಠಿಕ ಅಭಿಯಾನ ಯೋಜನೆಗಳು ಅನುಷ್ಠಾನ ಗೊಳ್ಳುತ್ತಿರುವ ಹಳ್ಳಿಗಳು ಮತ್ತು ನದಿ ಪಾತ್ರಗಳ ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅರ್ಹ ಸ್ವ - ಸಹಾಯ ಗುಂಪುಗಳನ್ನು ಪರಿಗಣಿಸುವುದು.
- ಇನ್‌ಟೆನ್ಸಿವ್ ತಾಲ್ಲೂಕುಗಳಲ್ಲಿ ವಾಸವಿರುವ ಆದಿ ಬುಡಕಟ್ಟು ಜನಾಂಗದ (ಜೇನು ಕುರುಬು ಮತ್ತು ಕೊರಗ- Primitive Scheduled Tribes) ಎಲ್ಲಾ ಅರ್ಹ ಸ್ವ-ಸಹಾಯ ಗುಂಪುಗಳನ್ನು ಪರಿಗಣಿಸುವುದು.
- ಶೇ.15 ರಷ್ಟು ಅ.ಸಂ, ಶೇ.3 ರಷ್ಟು ವಿ.ಚೇ, ಶೇ.35 ರಷ್ಟು ಪ.ಜಾತಿ ಮತ್ತು ಶೇ.15 ರಷ್ಟು ಪ.ಪಂಗಡದ ಅನುಪಾತದಲ್ಲಿ ಗುಂಪುಗಳನ್ನು ಗುರುತಿಸಿ ಸುತ್ತುನಿಧಿ ಮಂಜೂರು ಮಾಡುವುದು.
- ಸ್ವ ಸಹಾಯ ಗುಂಪಿನ ರಚನೆಯ ಜೇಷ್ಠತೆಯ ಆಧಾರದ ಮೇಲೆ ಆದ್ಯತೆ ನೀಡುವುದು.

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನದಡಿ ಸಮುದಾಯ ಬಂಡವಾಳ ನಿಧಿ ವಿತರಿಸಲು ಈ ಕೆಳಗಿನ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ.**

- ಎಸ್.ಎಚ್.ಜಿಗಳು ವಾರ್ಡ್ ಮಟ್ಟದ ಒಕ್ಕೂಟದಲ್ಲಿ ಸದಸ್ಯರಾಗಿರಬೇಕು.
- ಎಸ್.ಎಚ್.ಜಿಗಳು ಆರಂಭಗೊಂಡು ಕನಿಷ್ಠ 6 ತಿಂಗಳನ್ನು ಪೂರೈಸಿರಬೇಕು ಹಾಗೂ ಗುಂಪಿನ ಹೆಸರಿನಲ್ಲಿ ಬ್ಯಾಂಕ್ ಖಾತೆ ಹೊಂದಿರಬೇಕಾಗಿರುತ್ತದೆ.
- ಪಂಚಸೂತ್ರಗಳನ್ನು ಕಡ್ಡಾಯವಾಗಿ ಪಾಲಿಸುತ್ತಿರಬೇಕು.
- ಶ್ರೇಣಿಕರಣದಲ್ಲಿ “ಎ” ಮತ್ತು “ಬಿ” ಶ್ರೇಣಿ ಪಡೆದಿರಬೇಕು.
- ಕಿರು ಬಂಡವಾಳ ಹೂಡಿಕೆ (ಎಮ್‌ಐಪಿ) ಯೋಜನೆಯು ಜಿ.ಪಿ.ಎಲ್.ಎಫ್ ಉಪ ಸಮಿತಿಯಿಂದ ಪರಿಶೀಲನೆಗೊಂಡಿರಬೇಕು.
- ನಂತರ ಎಮ್‌ಐಪಿಯು ಜಿ.ಪಿ.ಎಲ್.ಎಫ್ ಇ.ಸಿ ಸಮಿತಿಯ ಅನುಮೋದನೆ ಪಡೆದಿರಬೇಕು.
- ಉಪಸಮಿತಿಯಿಂದ ಪರಿಶೀಲನೆಗೊಂಡು ಅನುಮೋದನೆ ಪಡೆದ /ಕ್ರಮವಾಗಿರುವ ಬಗ್ಗೆ ಧೃಡಪಡಿಸಿಕೊಂಡ ನಂತರ ಗ್ರಾಮ ಪಂಚಾಯಿತಿ ಮಟ್ಟದ ಒಕ್ಕೂಟದ ಕಾರ್ಯಕಾರಿ ಸಮಿತಿಯ ಮುಂದೆ ಮಂಡಿಸಿ ಅನುಮೋದನೆ ಪಡೆಯುವುದು.
- ಸಂಜೀವಿನಿ ಸಂಸ್ಥೆಯ 4ನೇ ಕಾರ್ಯಕಾರಿ ಸಮಿತಿಯಲ್ಲಿ ತೀರ್ಮಾನಿಸಿದಂತೆ ಕನಿಷ್ಟ 5 ಬಡವರ್ಗದ ಸದಸ್ಯರನ್ನು ಹೊಂದಿರಬೇಕು.

| | |
|---|---|
| | **ಡೇ-ನಲ್ಮ್:**<br><br>ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯ ಡೇ-ನಲ್ಮ್ ಅಭಿಯಾನದಡಿ ಪ್ರಯೋಜನವನ್ನು ಪಡೆಯಲು ನಿಗದಿಪಡಿಸಲಾದ ಮಾನದಂಡಗಳು ಈ ಕೆಳಕಂಡಂತಿರುತ್ತದೆ.<br>**ಯೋಜನೆಯ ಮಾನದಂಡ ಃ-**<br>1. ನಗರದ ವ್ಯಾಪ್ತಿಯ ಅರ್ಹ ಬಡ ಫಲಾನುಭವಿಗಳಾಗಿರಬೇಕು.<br>2. ಫಲಾನುಭವಿಗಳ ಕುಟುಂಬದ ವಾರ್ಷಿಕ ಆದಾಯ ರೂ.1.20 ಲಕ್ಷದ ಒಳಗಿರಬೇಕು.<br>3. ಈ ಕೆಳಕಂಡ ದಾಖಲಾತಿಗಳನ್ನು ಪರಿಗಣಿಸಲಾಗುವುದು<br>➢ ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳೆಂದು ಗುರುತಿಸಲು ರೇಷನ್ ಕಾರ್ಡ್, ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಮತ್ತು ಆಧಾರ್ ಕಾರ್ಡ್.<br>4. ತರಬೇತಿಗೆ 16 ರಿಂದ 45 ವರ್ಷ ವಯೋಮಾನ. |
| (ಇ) ಮೇಲ್ಕಂಡ ಜಿಲ್ಲೆಗಳಲ್ಲಿ ಎಲ್ಲೆಲ್ಲಿ ಕೌಶಲ್ಯಾಭಿವೃದ್ಧಿ ಕೇಂದ್ರಗಳನ್ನು ತೆರೆಯಲಾಗಿದೆ; ಈ ಕೇಂದ್ರಗಳ ಮುಖ್ಯ ಉದ್ದೇಶ ಮತ್ತು ಕಾರ್ಯ ಚಟುವಟಿಕೆಗಳೇನು ?<br>(ವಿವರ ನೀಡುವುದು) | **ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ :**<br>ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮದ ವತಿಯಿಂದ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರಧಾನಮಂತ್ರಿಗಳ ಕೌಶಲ್ಯ ವಿಕಾಸ್ ಯೋಜನೆಗಳನ್ನು ಸರ್ಕಾರಿ ಹಾಗೂ ಖಾಸಗಿ ತರಬೇತುದಾರ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದ್ದು, ರಾಜ್ಯದ ಯುವ ಜನತೆಗೆ ಉಚಿತ ಕೌಶಲ್ಯಾಧಾರಿತ ತರಬೇತಿ ನೀಡಿ ಉದ್ಯೋಗಾವಕಾಶದೊಂದಿಗೆ ಉದ್ಯಮಶೀಲತೆ ಒದಗಿಸುವುದಾಗಿದೆ.<br>ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಯ ಈ ಕೆಳಕಂಡ ತಾಲ್ಲೂಕಿನ ವ್ಯಾಪ್ತಿಯಲ್ಲಿ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ. |

**ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ :**

| (ಕಲಬುರಗಿ ಜಿಲ್ಲೆ ) ತಾಲ್ಲೂಕು | ತರಬೇತುದಾರ ಕೇಂದ್ರದ ಸಂಖ್ಯೆ | (ಯಾದಗಿರಿ ಜಿಲ್ಲೆ) ತಾಲ್ಲೂಕು | ತರಬೇತುದಾರ ಕೇಂದ್ರದ ಸಂಖ್ಯೆ |
|---|---|---|---|
| ಕಲಬುರಗಿ | 17 | ಶಹಪೂರ್ | 5 |
| ಅಳಂದ | 2 | ಸುರಪೂರ್ | 5 |
| ಅಫ್ಜಲ್‌ಪುರ | 2 | ಯಾದಗಿರಿ | 8 |
| ಸೇಡಂ | 2 | - | - |
| ಚಿತ್ತಾಪುರ | 2 | - | - |
| ಜೇವರ್ಗಿ | 1 | - | - |
| ಚಿಂಚೋಳಿ | 1 | - | - |

**ಪ್ರಧಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆ :**

| (ಕಲಬುರಗಿ ಜಿಲ್ಲೆ) ತಾಲ್ಲೂಕು | ತರಬೇತುದಾರ ಕೇಂದ್ರದ ಸಂಖ್ಯೆ | (ಯಾದಗಿರಿ ಜಿಲ್ಲೆ) ತಾಲ್ಲೂಕು | ತರಬೇತುದಾರ ಕೇಂದ್ರದ ಸಂಖ್ಯೆ |
|---|---|---|---|
| ಕಲಬುರಗಿ | 1 | ಯಾದಗಿರಿ | 1 |
| ಅಳಂದ | 1 | - | - |
| ಅಫ್ಜಲ್‌ಪುರ | 1 | - | - |

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):**

ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ದೀನ ದಯಾಳ ಉಪಾಧ್ಯಯ ಗ್ರಾಮೀಣ ಕೌಶಲ್ಯ ಯೋಜನೆಯಡಿ ಮತ್ತು ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆಯಡಿ ಈ ಕೆಳಕಂಡಂತೆ ಯೋಜನಾ ಅನುಷ್ಠಾನ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ.

| ಕ್ರ.ಸಂ. | ಜಿಲ್ಲೆ | ಡಿಡಿಯುಜಿಕೆವೈ ಸಂಸ್ಥೆಯ ಹೆಸರು | ಆರ್‌ಸೆಟಿ ಸಂಸ್ಥೆಯ ಹೆಸರು |
|---|---|---|---|
| 1 | ಕಲಬುರಗಿ | ಶಾಹಿ ಎಕ್ಸಪೋರ್ಟ, | ಎಸ್‌ಬಿಐ |
| 2 | ಯಾದಗಿರಿ | ಶಾಹಿ ಎಕ್ಸಪೋರ್ಟ, | ಎಸ್‌ಬಿಐ |

1. ದೀನ ದಯಾಳ ಉಪಾಧ್ಯಯ ಗ್ರಾಮೀಣ ಕೌಶಲ್ಯ ಯೊಜನೆಯ ತರಬೇತಿ ಕೇಂದ್ರ ಮುಖ್ಯ ಉದ್ದೇಶ ಗ್ರಾಮೀಣ ಪ್ರದೇಶದ ಯುವಕ/ ಯುವತಿಯರಿಗೆ ಕೌಶಲ್ಯ ಸಂಬಂಧಿಸಿದಂತೆ ತರಬೇತಿಯನ್ನು ನೀಡುವದರ ಜೋತೆಗೆ ಉದ್ಯೋಗ ಅವಕಾಶವನ್ನು ನೀಡುವದಾಗಿದೆ.
2. ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆಯ ಮುಖ್ಯ ಉದ್ದೇಶ ಗ್ರಾಮೀಣ ನಿರುದ್ಯೋಗ ಯುವಕ/ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳಲು ತರಬೇತಿಯನ್ನು ನೀಡುವದಾಗಿರುತ್ತದೆ.

**ಡೇ-ನಲ್ಮ್:**

ಡೇ-ನಲ್ಮ್ ಅಭಿಯಾನದಡಿ ಯಾವುದೇ ತರಬೇತಿ ಕೇಂದ್ರಗಳನ್ನು ತೆರೆಯಾಲಾಗಿರುವುದಿಲ್ಲ. ಆದಾಗ್ಯೂ ಖಾಸಗಿ ತರಬೇತಿ ಸಂಸ್ಥೆಗಳನ್ನು ತೊಡಗಿಸಿಕೊಂಡು ಅಭಿಯಾನದ ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳನಿಯುಕ್ತಿ ಉಪಘಟಕದಡಿ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿರುತ್ತದೆ. ಅಂತಹ ತರಬೇತಿ ಕೇಂದ್ರಗಳ ವಿವರ ಈ ಕೆಳಕಂಡಂತಿರುತ್ತದೆ.

| Name of the ULB | Address of Training Centre |
|---|---|
| CMC Bagalkot | M/s Turning Point Computers Basaveshwara Bank CMC Complex, VidyagiriBagalkot |
| | M/sTurning Point Computers Sovanna Technologies Sri Raghavendra Complex Sector No.4 Near Kalidas Circle Navanagara, Bagalkot |
| CMC RabakaviBanahatti | M/sTurning Point Computers Bhavani Computer World, Near VittalMandir, MangawarPeth, Banhatti-587311 |
| TP Bilagi | M/sTurning Point Computers Infoline Systems, Bustand Road Bilagi |
| CMC Ilkal | M/sTurning Point Computers C/o. PragatiComputers,C/o Keonocs Near BustandIlkal |

ಅಭಿಯಾನದಡಿ ನೀಡಲಾಗಿರುವ ತರಬೇತಿ ವಿಷಯ ಮತ್ತು ಭೌತಿಕ ಗುರಿಗೆ ಅನುಸಾರ ತರಬೇತಿ ಆಯೋಜಿಸುವುದು ಮೇಲ್ಕಂಡ ತರಬೇತಿ ಕೇಂದ್ರಗಳು ಮಾಡುತ್ತವೆ.

ಸಂಖ್ಯೆ: ಕೌಉಜೀಇ 63 ಉಜೀಪ್ರ 2021

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
ಮಾನ್ಯ ಉನ್ನತ ಶಿಕ್ಷಣ, ವಿದ್ಯುನ್ಮಾನ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು